## ತರಗತಿ ವೀಕ್ಷಣೆ

*ದೀಪಕ್ ದೀಕ್ಷಿತ್*



ತರಗತಿಯ ವೀಕ್ಷಣೆಗಳನ್ನು ಶಿಕ್ಷಕರು ಯಾವಾಗಲೂ ಸಂದೇಹದಿಂದಲೇ ನೋಡುತ್ತಾರೆ. ಶಿಕ್ಷಕನಾಗಿ ನಾನೂ ಕೂಡ ತರಗತಿ ವೀಕ್ಷಕರು ಹೇಳದಿದ್ದರೂ, ಸಾಂಕೇತಿಕವಾಗಿಯಾದರೂ ಅಧಿಕಾರವನ್ನು ಹೊಂದಿರುತ್ತಾರೆ ಎಂಬುದನ್ನು ಅರಿತುಕೊಂಡಿದ್ದೇನೆ. ಇದು ಶಿಕ್ಷಕರಿಗೆ, ತರಗತಿ ವೀಕ್ಷಕರು ಉನ್ನತ ಸ್ಥಾನದಲ್ಲಿರುತ್ತಾರೆ ಮತ್ತು ತರಗತಿಯು ಮುಕ್ತಾಯಗೊಂಡಾಗ ತರಗತಿ ನಿರ್ವಹಣೆಯಲ್ಲಿ ಕಂಡುಬಂದ ಸಮಸ್ಯೆಗಳನ್ನು ಮತ್ತು ಶಿಕ್ಷಕರು ವ್ಯವಹರಿಸಿದ ರೀತಿಯನ್ನು ಎತ್ತಿ ತೋರಿಸುತ್ತಾರೆ ಎಂಬ ಭಾವನೆ ನೀಡುತ್ತದೆ. ಶಿಕ್ಷಕರಿಗೆ ಸಾಧ್ಯವಾದಷ್ಟು ಮಟ್ಟಿಗೆ ಸಹಾಯ ಮಾಡುವ ವಿಧಾನಕ್ಕಿಂತ, ತರಗತಿಯನ್ನು ತನಿಖೆ ಮಾಡುವ ವಿಧಾನದಲ್ಲಿಯೇ ವೀಕ್ಷಣೆಯನ್ನು ಮಾಡುತ್ತಾರೆಂದು ಒಬ್ಬ ಶಿಕ್ಷಕನಾಗಿ ನನಗೆ ಅನ್ನಿಸಿದೆ ಮತ್ತು ಇತರರು ಕೂಡ ಇದನ್ನು ಒಪ್ಪುತ್ತಾರೆ.

ಅಜೀಂ ಪ್ರೇಮ್ ಜಿ ಶಾಲೆಗಳಲ್ಲಿ ತರಗತಿಯ ವೀಕ್ಷಣೆಯನ್ನು ವಿಭಿನ್ನ ದೃಷ್ಟಿಕೋನದಿಂದ ಕಾಣಲಾಗಿದೆ. ಇಲ್ಲಿ ಶಿಕ್ಷಕರಿಗೆ ಸಹಾಯ ಮಾಡುವ ಉದ್ದೇಶದಿಂದ ತರಗತಿಯ ವೀಕ್ಷಣೆ ನಡೆಯುತ್ತದೆ. ಅಂದರೆ ಶಿಕ್ಷಕರು ತರಗತಿ ನಡೆಸುವಾಗ ಸಹಜವಾಗಿ ಮರೆತು ಹೋದಕೆ ಕೆಲವು ವಿಷಯಗಳನ್ನು ಗಮನಿಸುತ್ತದೆ. ವೀಕ್ಷಣೆಯು ತರಗತಿಯಲ್ಲಿ ಕಂಡುಬರುವ ತಪ್ಪುಗಳನ್ನು ಪತ್ತೆ ಹಚ್ಚುವುದಕ್ಕಿಂತ ಹೆಚ್ಚಾಗಿ, ಅಲ್ಲಿನ ಸೂಕ್ಷ್ಮತೆಗಳನ್ನು ಗಮನಿಸಲು ಶಿಕ್ಷಕರಿಗೆ ಸಹಾಯ ಮಾಡುವಂತಹ ಅಂಶವೇ ಇಲ್ಲಿ ಹೆಚ್ಚು ಕಂಡುಬರುತ್ತದೆ. ಇಂತಹ ತರಗತಿ ವೀಕ್ಷಣೆಯು ಅಪಾರ ತಾಳ್ಮೆಯನ್ನು ಬೇಡುತ್ತದೆ ಮತ್ತು ಸವಾಲುಗಳನ್ನು ಕಲಿಕಾ ಅವಕಾಶಗಳನ್ನಾಗಿ ಬದಲಾಯಿಸಬೇಕಾಗುತ್ತದೆ.

ನಾನು ೫ ನೇ ತರಗತಿಯ ಇವಿಎಸಿ ವಿಷಯ ಬೋಧನೆ ತರಗತಿಯ ವೀಕ್ಷಕನಾಗಿದ್ದೆ. ನಾನು ಈ ಮೊದಲೇ ಶಿಕ್ಷಕರೊಂದಿಗೆ ತರಗತಿ ವೀಕ್ಷಣೆಯ ಯೋಜನೆಯನ್ನು ಹಂಚಿಕೊಂಡಿದ್ದರಿಂದ ಶಿಕ್ಷಕರು ಪೂರ್ವತಯಾರಿ ನಡೆಸಿಕೊಂಡು ಬಂದಿದ್ದರು. ಅಂದಿನ ವಿಷಯ–'ನೀರು' – ವಿಷಯವು ಸಾಮಾನ್ಯ ಎಂದೆನಿಸಿದರೂ ಬಹು ಆಸಕ್ತಿದಾಯಕವಾಗಿಯೇ ಕಂಡುಬಂದಿತ್ತು. ಆದ್ದರಿಂದ ಅದರ ಒಂದು ಕಾರ್ಯವಿಧಾನದ ಪ್ರಕ್ರಿಯೆಯನ್ನು ಸಂಬಂಧಪಟ್ಟ ಶಿಕ್ಷಕರೊಂದಿಗೆ ನಾನು ಚರ್ಚಿಸಿದೆ. ಆಗ ಅವರು ತಮ್ಮ ಪಾಠ ಯೋಜನೆಯನ್ನು ಮತ್ತು ಆ ಸಮಯದಲ್ಲಿ ಅವರು ಏನು ಮಾಡುತ್ತಾರೆ ಎಂಬುದನ್ನು ಸಂಕ್ಷಿಪ್ತವಾಗಿ ನನ್ನೊಂದಿಗೆ ಹಂಚಿಕೊಂಡರು. ಇದು ಒಂದು ರೀತಿಯಲ್ಲಿ ಉತ್ತಮ ಯೋಜನೆಯಂತೆ ಕಂಡುಬಂತು: ಅದರಲ್ಲಿ ಕೆಲವು ಚಟುವಟಿಕೆಗಳು, ಕೆಲವು ಚರ್ಚೆಯ ಅಂಶಗಳು, ಬರವಣಿಗೆಯ ಕೆಲಸ ಮತ್ತು ಸಂಕ್ಷಿಪ್ತ ಸಣ್ಣ ಗುಂಪು ಚರ್ಚೆಗಳು ಇದ್ದವು. ಒಟ್ಟಾರೆಯಾಗಿ ಪಾಠ ಯೋಜನೆಯು ಅಚ್ಚುಕಟ್ಟಾಗಿ ಸಮತೋಲಿತವಾಗಿ ಕಂಡುಬಂದಿದ್ದನ್ನು ನೋಡಿದೆ. ಅನಂತರ ನಾವಿಬ್ಬರು ಒಟ್ಟಿಗೆ ತರಗತಿಗೆ ಹೋದೆವು.

ಶಿಕ್ಷಕರು ಹಿಂದಿನ ದಿನದ ಪಾಠವನ್ನು ಪುನರಾವರ್ತಿಸುವ ಮೂಲಕ ತರಗತಿಯನ್ನು ಪ್ರಾರಂಭಿಸಿದರು. ವಿದ್ಯಾರ್ಥಿಗಳು ಸಹ ಉತ್ಸಾಹದಿಂದ ಭಾಗವಹಿಸಿ ಉತ್ತರಿಸಿದರು. ಅನಂತರ ಶಿಕ್ಷಕರು ತಮ್ಮ ಪಾಠ ಯೋಜನೆಯ ಭಾಗವಾಗಿ 'ಸುರಕ್ಷಿತ ಕುಡಿಯುವ ನೀರು' ಎಂಬ ವಿಷಯದ ಕುರಿತು ಕೆಲವು ಚಟುವಟಿಕೆಗಳನ್ನು ಮಾಡುವ ಯೋಜನೆಗೆ ಮುಂದಾದರು. ನೀರು ಹೇಗೆ ಕಲುಷಿತಗೊಳ್ಳುತ್ತದೆ ಮತ್ತು ಕಲುಷಿತಗೊಂಡ ನೀರು ಕುಡಿಯಲು ಯೋಗ್ಯವಲ್ಲ ಎಂಬುದರ ಬಗ್ಗೆ ವಿದ್ಯಾರ್ಥಿಗಳಿಗೆ ಅರಿವು ಮೂಡಿಸುವ ಉದ್ದೇಶ ಅದಾಗಿತ್ತು. ಚಟುವಟಿಕೆಯ ಮೂಲ ಮಾದರಿಯಲ್ಲಿ, ಒಂದು ಪಾರದರ್ಶಕ ಲೋಟದೊಳಗೆ ನೀರನ್ನು ತುಂಬಿಸುವುದು ಮತ್ತು ಅದರೊಳಗೆ ಸ್ವಲ್ಪ ಧೂಳು / ಕಸವನ್ನು ಬೆರೆಸಿ ಅನಂತರ ವಿದ್ಯಾರ್ಥಿಗಳಿಗೆ ಪ್ರಶ್ನಿಸುವುದು, ಈಗ ಇದು ಕುಡಿಯಲು ಯೋಗ್ಯವಾಗಿದೆಯೇ? ಎಂದು. ಕಲ್ಮಷಗಳ ಮಿಶ್ರಣವು ಯಾವುದೇ ನಲ್ಲಿಯ ನೀರು / ಅಂತರ್ಜಲವನ್ನು ಕುಡಿಯಲು ಅಯೋಗ್ಯವಾಗಿಸುತ್ತದೆ ಎಂಬುದನ್ನು ಶಿಕ್ಷಕರು ವಿದ್ಯಾರ್ಥಿಗಳಿಗೆ ಮನವರಿಕೆ ಮಾಡುವಂತಹ ಈ ಚಟುವಟಿಕೆಯ ಮಾದರಿಯಲ್ಲಿ ಈ ಪ್ರಶ್ನೆಗೆ ನಿರೀಕ್ಷಿತ ಉತ್ತರ 'ಇಲ್ಲ' ಎಂದಾಗಿತ್ತು..

ಶಿಕ್ಷಕರು ಈ ಚಟುವಟಿಕೆಯನ್ನು ಮಾಡಲು ಶುರುಮಾಡಿದರು. ಮೊದಲು ಅವರು ಒಂದು ಲೋಟವನ್ನು ತೆಗೆದುಕೊಂಡು ನೀರಿನ ಬಾಟಲಿಯಿಂದ ಸ್ವಲ್ಪ ನೀರನ್ನು ಲೋಟದೊಳಗೆ ಹಾಕಿದರು ಮತ್ತು ಒಬ್ಬ ವಿದ್ಯಾರ್ಥಿಯನ್ನು ಕರೆದು ಆ ನೀರನ್ನು ಕುಡಿಯಲು ಹೇಳಿದರು. ಆಗ ಒಬ್ಬ ವಿದ್ಯಾರ್ಥಿ ಬಂದು ಲೋಟದೊಳಗಿರುವ ನೀರನ್ನು ಕುಡಿದನು. ಹಾಗಾಗಿ ಈ ನೀರು ಕುಡಿಯಲು ಸುರಕ್ಷಿತವಾಗಿದೆ ಎಂದು ತೋರಿಸಿಕೊಟ್ಟರು. ಶಿಕ್ಷಕರು ಈಗ ಮುಂದಿನ ಹಂತಕ್ಕೆ ಹೋದರು, ನೀರಿಗೆ ಸ್ವಲ್ಪ ಸೀಮೆಸುಣ್ಣದ ಪುಡಿಯನ್ನು ಬೆರೆಸಿ ಈಗ ಯಾರಾದರೂ ಬಂದು ಈ ನೀರನ್ನು ಕುಡಿಯಬಹುದೇ ಎಂದು ಕೇಳಿದರು. ಉತ್ತರವು ತುಂಬಾ ಜೋರಾಗಿ "ಇಲ್ಲ" ಎಂದು ಬರುತ್ತದೆ ಎಂದು ನಿರೀಕ್ಷಿಸಿದ್ದರು, ಆದರೆ ಒಂದೇ ಒಂದು ಧ್ವನಿಮಾತ್ರ ಕೇಳಿಸಿತು ಇಲ್ಲ ಎಂದು, ಆದರೆ...... ಅಲ್ಲಿ ಮೌನ ನೆಲೆಸಿತ್ತು..... ಶಿಕ್ಷಕರು ಏಕೆ? ಏನಾಯಿತು? ಎನ್ನುತ್ತಾ, ಯಾರಾದರೂ ಈ ನೀರನ್ನು ಕುಡಿಯಬಹುದೇ? ಎಂದು ಮತ್ತೆ ಕೇಳಿದರು.

ಆಗ ಒಬ್ಬ ಹುಡುಗ 'ಹೌದು' ಎಂದು ಹೇಳಿದನು.

ಇದು ಶಿಕ್ಷಕರಿಗೆ ಸವಾಲಾಗಿ ಕಂಡಿತು. ಹೌದು 'ನಾನು ಅದನ್ನು ಕುಡಿಯ ಬಲ್ಲೆ, 'ಆದರೆ ನೀವು ಸ್ವಲ್ಪ ಸಮಯ ಆಲೋಟವನ್ನು ಹಾಗೆಯೇ ಇಡಬೇಕು" ಎಂದನು.

ಸೀಮೆ ಸುಣ್ಣದ ಪುಡಿ ನೀರಿನಲ್ಲಿ ಕರಗುವ ಬಗ್ಗೆ ತರಗತಿಯ ವೀಕ್ಷಕನಾಗಿದ್ದ ನನಗೂ ಸಹ ಯಾವುದೇ ಸುಳಿವು ಇರಲಿಲ್ಲ, ಏಕೆಂದರೆ ನಾನು ಅದನ್ನು ಯಾವತ್ತೂ ಪ್ರಯೋಗಿಸಿರಲಿಲ್ಲ ಕೂಡ. ಆದರೆ ಸೀಮೆ ಸುಣ್ಣವು ನೀರಿನಲ್ಲಿ ಕರಗುತ್ತದೆ ಎಂಬುದು ನನ್ನ ತಪ್ಪು ಕಲ್ಪನೆ ಆಗಿತ್ತು. (ಈಗಲೂ ನಾನು ಅದನ್ನು ತಪ್ಪು ಕಲ್ಪನೆ

ಎಂದು ಕರೆಯಲಿಚ್ಛಿಸುತ್ತೇನೆ).

ಇದು ಶಿಕ್ಷಕರ ಘನತೆಗೆ ಒಂದು ಸವಾಲಾಗಿತ್ತು ಎಂಬುದು ಸ್ಪಷ್ಟವಾಗಿ ಗೋಚರಿಸುತ್ತಿತ್ತು. ಈಗ ಶಿಕ್ಷಕರು ಈಗಾಗಲೇ ಪ್ರಯೋಗಿಸಿದ ಚಟುವಟಿಕೆಯನ್ನು ಮತ್ತಷ್ಟು ಸಂಕೀರ್ಣಗೊಳಿಸುವ ಮೂಲಕ ಮತ್ತೊಂದು ಸವಾಲನ್ನು ಮಕ್ಕಳಿಗೆ ಒಡ್ಡಿದರು. ಅವರು 'ಸರಿ, ಬಹುಶಃ ಸೀಮೆಸುಣ್ಣದ ಪುಡಿಯ ಮಿಶ್ರಣದ ನೀರನ್ನು ನೀವು ಕುಡಿಯಲು ಸಾಧ್ಯವಾಗುತ್ತದೆ ಎಂದಾದರೆ, ಈಗ ನಾನು ನೀರಿಗೆ ಮಣ್ಣು, ಮರಳು ಮತ್ತು ಕಸವನ್ನು ಸೇರಿಸುತ್ತೇನೆ,' ಎಂದು ಹೇಳುತ್ತಾ, ನಿಜವಾಗಿಯೂ ಹೇಳಿದಂತೆಯೇ ಮಾಡಿದರು ಮತ್ತು ಅನಂತರ ತರಗತಿಯ ಮಕ್ಕಳಿಗೆ ಕೇಳಿದರು, 'ಈಗ ಯಾರಾದರೂ ಈ ನೀರನ್ನು ಕುಡಿಯಬಹುದೇ?' ಎಂದು.

ವೀಕ್ಷಕರಿಗೆ ಪ್ರಾತ್ಯಕ್ಷಿಕೆಯ ತರಗತಿಯಂತೆ ಯೋಜನೆ ಕಾರ್ಯಗತಗೊಳ್ಳುವ ಪರಿಸ್ಥಿತಿ ಇಲ್ಲಿ ಕಂಡುಬಂದಿದೆ. ಆದರೆ ಇಲ್ಲಿ ಮಕ್ಕಳು ಅವರದೇ ಆದ ವಿಶಿಷ್ಟ ಆಲೋಚನೆಗಳನ್ನು ಹೊಂದಿದ್ದರು; ಅವರಲ್ಲಿ ಒಬ್ಬ ವಿದ್ಯಾರ್ಥಿ ಮತ್ತೊಮ್ಮೆ 'ಹೌದು, ನಾನು ಅದನ್ನು ಕುಡಿಯಬಹುದು' ಎಂದು ಹೇಳಿದನು.

'ಹೇಗೆ?' ಎಂದು ಶಿಕ್ಷಕರು ಕೇಳಿದರು.

'ಆರ್ ಒ' (ರಿವರ್ಸ್ ಆಸ್ಮೋಸಿಸ್) ಯಂತ್ರದಲ್ಲಿ ಗಲೀಜು ನೀರು ಹಾಕಿ ಶುದ್ಧ ನೀರು ಪಡೆಯುತ್ತೇನೆ" ಎಂಬ ಉತ್ತರ ಬಂತು.

ಇದು ಶಿಕ್ಷಕರಿಗೆ ವಿದ್ಯಾರ್ಥಿಗಳು ಒಡ್ಡಿದ ಮತ್ತೊಂದು ಹಂತದ ಸವಾಲಾಗಿತ್ತು. ಆದರೆ ಶಿಕ್ಷಕರು ಈಗಲೂ ಸೋಲೊಪ್ಪಿಕೊಳ್ಳಲು ಸಿದ್ಧರಿರಲಿಲ್ಲ. ಹಾಗಾಗಿ ಅವರು ಕೇಳಿದರು. "ಒಳ್ಳೆಯದೇ, ಆದರೆ ನಿಮ್ಮ ಬಳಿ ಆರ್ ಒ ಯಂತ್ರ ಇಲ್ಲದಿದ್ದರೆ ಏನು ಮಾಡುತ್ತೀರಾ?" ಈ ಪ್ರಶ್ನೆಯಿಂದ ಶಿಕ್ಷಕರು ತಾವು ಮೊದಲೇ ನಿರ್ಧರಿಸಿದ ಹಾಗೂ ನಿರೀಕ್ಷಿತ ಪ್ರತಿಕ್ರಿಯೆಗೆ ವಿದ್ಯಾರ್ಥಿಗಳನ್ನು ತರುವ ಉದ್ದೇಶ ಹೊಂದಿದ್ದರು. ಆದರೆ ಯೋಜನೆಯ ಪ್ರಕಾರ ನಿರೀಕ್ಷಿತ ಪ್ರಮಾಣಿತ ಪ್ರತಿಕ್ರಿಯೆಯನ್ನು ನೀಡಲು ವಿದ್ಯಾರ್ಥಿಗಳು ಸಿದ್ಧರಿರಲಿಲ್ಲ. ತರಗತಿಯಲ್ಲಿ ಮೌನ ಆವರಿಸಿತು ...... ಮತ್ತೊಮ್ಮೆ!

ಆಗ ಮೃದುವಾದ ಧ್ವನಿಯಲ್ಲಿ: 'ಹೌದು, ನಾನು 'ಆರ್ ಒ' (RO) ಯಂತ್ರದ ಸಹಾಯವಿಲ್ಲದೆಯೇ ಇದನ್ನು ಮಾಡಬಲ್ಲೆ' ಎಂದು ಒಬ್ಬ ಹುಡುಗಿ ಹೇಳಿದಳು.

ಇದನ್ನು ಕೇಳಿ ಶಿಕ್ಷಕರು ತನ್ನ ತಾಳ್ಮೆಯನ್ನು ಕಳೆದುಕೊಂಡು ಬಿಟ್ಟರು ಮತ್ತು 'ಸರಿ, ನಿನಗೆ ಇದನ್ನು ಮಾಡಲು ಸಾಧ್ಯವಾಗಬಹುದು, ಆದರೆ ಕಲ್ಮಷವನ್ನು ನೀರಿನಲ್ಲಿ ಮಿಶ್ರಣ ಮಾಡಿದಾಗ ಅದು ಕುಡಿಯಲು ಯೋಗ್ಯವಲ್ಲ' ಎಂಬುದನ್ನು ತಿಳಿಸುವ ಮಾದರಿ ಇದಾಗಿತ್ತು ಎಂದು ಹೇಳುತ್ತಾ ತನ್ನ ಪಾಠ ಯೋಜನೆಯಂತೆ ತರಗತಿಯನ್ನು ಮುಂದುವರಿಸಿದರು. ಅನಂತರ ಅವರ ತರಗತಿಯ ಅವಧಿ ಮುಗಿಯಿತು.

ಆ ದಿನದ ತರಗತಿಯ ಅವಧಿ ಮುಗಿದ ಅನಂತರ ನಾವಿಬ್ಬರೂ ಒಟ್ಟಿಗೆ ಕುಳಿತು ತರಗತಿ ಹೇಗೆ ನಡೆಯಿತು ಎಂದು ಚರ್ಚಿಸಿದೆವು. ಕೆಲವು ವಿದ್ಯಾರ್ಥಿಗಳು ನಡೆಸಿದ ಅನಿರೀಕ್ಷಿತ ಚರ್ಚೆಯಿಂದಾಗಿ ತರಗತಿಯು ನಾವು ಅಂದುಕೊಂಡಂತೆ ನಡೆಯಲಿಲ್ಲ ಮತ್ತು ನಮ್ಮ ಯೋಜನೆಯು ಹಳಿ ತಪ್ಪಿದಂತಾಯಿತು, ಇತ್ಯಾದಿ. ಎಂದು ಶಿಕ್ಷಕರು ಚರ್ಚೆಯ ಸಮಯದಲ್ಲಿ ಒಪ್ಪಿಕೊಂಡರು. ಚರ್ಚೆಯು ಮುಗಿದ ಬಳಿಕ ನಾನು ಶಿಕ್ಷಕರನ್ನು ಕೇಳಿದೆ, "ಮಕ್ಕಳು ಕಲ್ಮಷ ಬೆರೆಸಿದ ನೀರನ್ನು ಕುಡಿಯಲು ಯೋಗ್ಯವಾಗಿಸಬಹುದು ಎಂಬ ನಿಜಾಂಶವನ್ನು ಪ್ರತಿಪಾದಿಸಲು ಅವಕಾಶ ಕೊಟ್ಟಿದ್ದರೆ ಹೇಗಿರುತ್ತಿತ್ತು" ಎಂದು. ಆಗ ಶಿಕ್ಷಕರು ಹೇಳಿದರು, 'ಶಿಕ್ಷಕರಾದ ನಾವು ಮಕ್ಕಳಿಗೆ ಸವಾಲುಗಳನ್ನು ಕೊಟ್ಟು ಅವುಗಳನ್ನು ಸಾಬೀತುಪಡಿಸಲು ಕೇಳಬೇಕು' ಎಂದರು.

ಹಾಗಾಗಿ ಹಿಮ್ಮಾಹಿತಿ ನೀಡುವಾಗ ನಾನು ನಾಳೆಯ ಪಾಠ ಯೋಜನೆಯನ್ನು ಅವರಿಗೆ ತಿಳಿಸಿದೆ. ಶಿಕ್ಷಕರು ಅದೇ ವಿಷಯವನ್ನು ನಾಳೆಯೂ ಮುಂದುವರಿಸುವುದು ಮತ್ತು ಯಾರೆಲ್ಲ ನೀರನ್ನು ಕುಡಿಯಲು ಯೋಗ್ಯವಾಗಿಸಬಹುದು ಎಂದು ಅಂದುಕೊಂಡಿದ್ದಾರೋ ಅವರೆಲ್ಲರೂ ತಾವಾಗಿಯೇ ಬಂದು ಅದನ್ನು ಹೇಗೆ ಮಾಡಬಹುದು ಎಂದು ಸಾಬೀತುಪಡಿಸಿ ನಮಗೆ ತೋರಿಸಬೇಕೆಂದು ಕೇಳುವುದಾಗಿತ್ತು. ಅದನ್ನು ಮಾಡಲು ಬೇಕಾದಂತಹ ಪರಿಕರಗಳ ಪಟ್ಟಿಯನ್ನು ಅವರು ಮಾಡಲಿ, ಅವುಗಳನ್ನು ಒದಗಿಸುವ ಪ್ರಯತ್ನ ನಾವು ಮಾಡೋಣವೆಂದು. ಅನಂತರ ಅದನ್ನು ಹೇಗೆ ಮಾಡಲು ಸಾಧ್ಯವಾಗುತ್ತದೆ ಎಂಬುದನ್ನು ನಾವು ಕಾದು ನೋಡುವುದೆಂದು.

ಮರುದಿನ ಶಿಕ್ಷಕರು ಮುಕ್ತವಾಗಿ ತರಗತಿಗೆ ಹೋದರು ಮತ್ತು ಹಿಂದಿನ ದಿನ ನಾವು ನಡೆಸಿದ ಚರ್ಚೆಯಂತೆಯೇ ತರಗತಿಯನ್ನು ಮುಂದುವರಿಸಿದರು. ಆಶ್ಚರ್ಯವೆಂದರೆ ಅಂದು ತರಗತಿಯಲ್ಲಿ ಸುಮಾರು ಶೇ.೭೫ ರಷ್ಟು ಮಕ್ಕಳು ತಮ್ಮ ಕಲ್ಪನೆಗಳನ್ನು ಪ್ರತಿಪಾದಿಸಲು ಮತ್ತು ಅದನ್ನು ಸಾಬೀತುಪಡಿಸಲು ಸಿದ್ಧರಾಗಿದ್ದಾರೆಂಬುದು. ಹಾಗಾಗಿ ಅವರಿಗೆ ಅಗತ್ಯವಿರುವ ಸಾಮಗ್ರಿಗಳ ಪಟ್ಟಿಯನ್ನು ತಯಾರಿಸಿ ಅವುಗಳನ್ನು ಒದಗಿಸಲು ವ್ಯವಸ್ಥೆ ಮಾಡಿದರು. ಹಲವು ವಿದ್ಯಾರ್ಥಿಗಳಿಗೆ ಬಟ್ಟಿ ಇಳಿಸುವಿಕೆ ಮತ್ತು ಬೇರ್ಪಡಿಸುವಿಕೆಯ ಇತರ ತಂತ್ರಗಳ ಬಗ್ಗೆ ಸುಳಿವೇ ಇಲ್ಲದಿದ್ದರೂ ಅವುಗಳನ್ನು ಅನ್ವಯಿಸುತ್ತಿರುವುದನ್ನು ನೋಡಿ ನಮಗೆ









ನಿಜಕ್ಕೂ ಆಶ್ಚರ್ಯವೆನಿಸಿತು.

ವಿದ್ಯಾರ್ಥಿಗಳ ಒಂದು ಗುಂಪು ಒಂದು ಗಾಜಿನ ಲೋಟದಲ್ಲಿ ನೀರನ್ನು ಹಾಕಿ ಅದನ್ನು ಮೇಣದ ಬತ್ತಿಯ ಮೇಲಿಟ್ಟು ಕುದಿಸುತ್ತಿದ್ದರು ಮತ್ತು ಆವಿಯನ್ನು ಸಂಗ್ರಹಿಸುತ್ತಿದ್ದರು ಹಾಗೂ ಸಾಂದ್ರೀಕೃತ /ಘನೀಕೃತ ಆವಿಯನ್ನು ಪ್ರತ್ಯೇಕ ಗಾಜಿನ ಲೋಟದಲ್ಲಿ ಸಂಗ್ರಹಿಸಲಾಗುತ್ತಿತ್ತು.

ಮತ್ತೊಂದು ಗುಂಪು ಕತ್ತರಿಸಿ ತೆರೆದ ಮೂರು ನೀರಿನ ಬಾಟಲ್ ಗಳನ್ನು ಬಳಸುತ್ತಿದ್ದರು. ಒಂದನ್ನು ಜರಡಿಯಾಗಿ ಬಳಸಲಾಗುತ್ತಿತ್ತು ಮತ್ತು ಅದರಿಂದ ಸಂಗ್ರಹವಾಗಿದ್ದ ನೀರನ್ನು ಪುನಃ ಶುದ್ಧವಾದ ಚಿಕ್ಕ ಬಟ್ಟೆಯನ್ನು ಬಳಸಿ ಕಲ್ಲು, ಮರಳು ಮತ್ತು ಇದ್ದಿಲಿನಂತಹ ಕಸವನ್ನು ಸೋಸುತ್ತಿದ್ದರು.

ಉಪಕರಣಗಳು ಮತ್ತು ಅನುಭವದ ಮಿತಿಯಿದ್ದರೂ, ಪ್ರಕ್ರಿಯೆಯ ಸೈದ್ಧಾಂತಿಕ ಭಾಗವು ಅಖಂಡವಾಗಿಯೇ ಇತ್ತು. ಒಬ್ಬ ವಿದ್ಯಾರ್ಥಿಯು ತಾನು ನೀರಿನಿಂದ ಸೀಮೆ ಸುಣ್ಣದ ಪುಡಿಯನ್ನು ಹೇಗೆ ಬೇರ್ಪಡಿಸುತ್ತೇನೆ ಎಂದು ನನಗೆ ತೋರಿಸಿದನು. ಸೀಮೆಸುಣ್ಣದ ಪುಡಿಯು ತಳದಲ್ಲಿ ರಾಡಿಯಂತಾಗಿ ಮತ್ತು ಅದರ ಮೇಲಿನ ನೀರು ತಿಳಿ ಮತ್ತು ಪಾರದರ್ಶಕವಾಗಿ ಇದ್ದುದನ್ನು ನಾನು ನೋಡಿದೆ. ರಾಸಾಯನಿಕವಾಗಿ ಇದು ಕುಡಿಯಲು ಯೋಗ್ಯವಾಗಿಲ್ಲದಿದ್ದರೂ, ಭೌತಿಕವಾಗಿ ಪ್ರತ್ಯೇಕತೆಯ ಪ್ರಕ್ರಿಯೆಯು ತುಂಬ ಸ್ಪಷ್ಟವಾಗಿತ್ತು.

ನಮಗೆ ಸ್ಪಷ್ಟವಾಗಿ ಕಂಡುಬಂದ ಅಂಶವೆಂದರೆ ೫ನೇ ತರಗತಿಯ ವಿದ್ಯಾರ್ಥಿಗಳು ನಾವು ನಿರೀಕ್ಷಿಸದ್ದಕ್ಕಿಂತಲೂ ಹೆಚ್ಚಾಗಿ ಅರಿತಿದ್ದಾರೆ ಎಂಬುದು. ಇದು ನಮ್ಮೆಲ್ಲರಿಗೂ ಆಹ್ಲಾದಕರವಾದ ವಿಸ್ಮಯದ ಸಂಗತಿಯಾಗಿತ್ತು. ಈ ರೀತಿಯ ಸಂಕೀರ್ಣ ಜಟಿಲವಾದ ಬೇರ್ಪಡಿಸುವಿಕೆ ಯತಂತ್ರಗಳು ವಿದ್ಯಾರ್ಥಿಗಳಿಗೆ ಗೊತ್ತಿರಬಹುದು ಎಂದು ನಾವು ಊಹಿಸಿಯೇ ಇರಲಿಲ್ಲ. ಬಹುಶಃ ನಾವು ನಮ್ಮ ವಿದ್ಯಾರ್ಥಿಗಳನ್ನು ಕಡೆಗಣಿಸುತ್ತೇವೆ ಮತ್ತು ನಾವು ಅವರಿಗೆ ಏನು ಮಾಡುತ್ತಿದ್ದೇವೆ ಎನ್ನುವುದಕ್ಕಿಂತ, ಇನ್ನೂ ಹೆಚ್ಚಿನ ಮಟ್ಟದಲ್ಲಿ ಮಾಡಲು ಅವರು ಸಮರ್ಥರಾಗಿದ್ದಾರೆ ಎಂಬ ಅಂಶವನ್ನು ಅವರು ಸ್ಪಷ್ಟವಾಗಿ ತೋರಿಸಿದ ಹೊರತು ಒಂದು ನಿರ್ಧಿಷ್ಟ ಮಟ್ಟಕ್ಕೆ ಮಾತ್ರ ಅವರನ್ನು ಸೀಮಿತಗೊಳಿಸುತ್ತಿದ್ದೇವೇನೋ ಎಂದು ಈಗ ನಾನು ಯೋಚಿಸುತ್ತಿದ್ದೇನೆ.

---

**ದೀಪಕ್ ದಿಕ್ಷೀತ್:** ಇವರು ಪ್ರಸ್ತುತ ಉತ್ತರಾಖಂಡದ, ದಿನೇಶ್ ಪುರದಲ್ಲಿನ ಅಜೀಂ ಪ್ರೇಮ್ ಜಿ ಶಾಲೆಯಲ್ಲಿ ಪ್ರಾಂಶುಪಾಲರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಇದಕ್ಕೂ ಮೊದಲು, ಅವರು 10 ವರ್ಷಗಳ ಕಾಲ ಎರಿಟ್ರಿಯಾದ ಶಿಕ್ಷಣ ಸಚಿವಾಲಯದಲ್ಲಿ ಕೆಲಸ ಮಾಡುತ್ತಿದ್ದರು. ಇವರು M.Sc., B.Ed. ಮತ್ತು M.B.A ಪದವಿಗಳನ್ನು ಪಡೆದಿದ್ದಾರೆ. ಭೌತಶಾಸ್ತ್ರ ಶಿಕ್ಷಕರಾಗಿ 17 ವರ್ಷಗಳಿಗಿಂತಲೂ ಹೆಚ್ಚಿನ ಬೋಧನಾ ಅನುಭವವನ್ನು ಹೊಂದಿರುವ ಇವರಿಗೆ ಎಲೆಕ್ಟ್ರಾನಿಕ್ಸ್ ವಿಷಯವನ್ನು ಬೋಧಿಸುವುದೆಂದರೆ ಅಚ್ಚುಮೆಚ್ಚು. ಅವರು ಮುಂಬೈನ ಎಚ್‌ಬಿಸಿಎಸ್‌ಇಯಲ್ಲಿ ಎಪಿಸ್ಟೀಮ್–6ರಲ್ಲಿ ವಿಜ್ಞಾನ ಬೋಧನೆಗೆ ಸಂಬಂಧಿಸಿದ ಪ್ರಬಂಧಗಳನ್ನು ಮಂಡಿಸಿದ್ದಾರೆ. ತರಗತಿ ಬೋಧನೆಗೆ ಸಂಬಂಧಪಟ್ಟ ಅವರ ಲೇಖನಗಳನ್ನು "ಟೀಚರ್ – ಎ ರಿಫ್ಲೆಕ್ಟಿವ್ ಪ್ರಾಕ್ಟೀಷನರ್" ಪುಸ್ತಕ ರೂಪದಲ್ಲಿ ಪ್ರಕಟಿಸಲಾಗಿದೆ. ಟೇಬಲ್ ಟೆನ್ನಿಸ್ ಆಡುವುದು ಮತ್ತು ಓದುವುದು ಅವರ ನೆಚ್ಚಿನ ಹವ್ಯಾಸವಾಗಿದೆ.

ಅವರ ಸಂಪರ್ಕಕ್ಕೆ: deepak.dixit@azimpremjifoundation.org